ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

B. B. M. P. ದಾನಪತ್ರ, ಕ್ರಯಪತ್ರ ಮತ್ತು ವಿಭಾಗ ಪತ್ರಗಳ ಕುರಿತು

ಶ್ರೀ ಹೆಚ್. ಎಂ. ರಮೇಶಗೌಡ(ವಿಧಾನಸಭೆಯಿಂದ ಚುನಾಯಿತರಾದವರು) –

527 (474) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬಿ.ಬಿ.ಎಂ.ಪಿ ದಾನಪತ್ರ, ಕ್ರಯಪತ್ರ ಮತ್ತು ವಿಭಾಗ ಪತ್ರಗಳ ಅನ್ವಯ ಆಸ್ತಿ ವಿಭಜನೆ ಕಾನೂನುಬಾಹಿರ ಎಂದು 20 ಅಕ್ಟೋಬರ್ 2014ರಲ್ಲಿ ಸುತ್ತೋಲೆ ಹೊರಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಸುತ್ತೋಲೆಯ ಕುರಿತು ಸರ್ಕಾರದ ಸ್ಪಷ್ಟ ನಿಲುವೇನು;

(ಆ) ಕೇವಲ ಆಸ್ತಿ ತೆರಿಗೆ ಶುಲ್ಕ ಮಾತ್ರ ವಸೂಲಿ ಮಾಡುವ ಮಹಾನಗರ ಪಾಲಿಕೆ ಆಸ್ತಿ ವಿಭಜನೆಯ ಕುರಿತು ಯಾವ ನಿಯಮಾವಳಿ ಅನ್ವಯ ಈ ಸುತ್ತೋಲೆ ಹೊರಡಿಸಿದೆ;

(ಇ) ಬಿ.ಬಿ.ಎಂ.ಪಿ ಸುತ್ತೋಲೆಯ ಪ್ರಕಾರ ಖಾತಾ ನೋಂದವಣೆ ವಿಭಜನೆಗಳು ಯಾವ ಆಸ್ತಿಗೆ ಅನ್ವಯಿಸುತ್ತವೆ; ಪಾಲಿಕೆಯ ಸುತ್ತೋಲೆಯಿಂದ ಪಿತ್ರಾರ್ಜಿತ ಆಸ್ತಿ ಹಂಚಿಕೆಯಲ್ಲಿ ಜನಸಾಮಾನ್ಯರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಎ ಖಾತಾ ಮತ್ತು ಬಿ ಖಾತಾ ನಡುವಿನ ವ್ಯತ್ಯಾಸಗಳೇನು; ಬಿ ಖಾತಾ ಹೆಸರಿನಲ್ಲಿ ದಂದೆ ನಡೆಯುತ್ತಿರುವುದು ಮತ್ತು ಜನರನ್ನು ಬಿ.ಬಿ.ಎಂ.ಪಿ ಖಾತೆಯ ಹೆಸರಲ್ಲಿ ಶೋಷಣೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು?